ಮಾನ್ಯ ಲೋಕಾಯುಕ್ತರವರ ವರದಿಯಲ್ಲಿನ ಅಂಶದಂತೆ Investigation Officer ತನಿಖೆ ಸಂದರ್ಭದಲ್ಲಿ ಸಂಗ್ರಹಿಸಿದ ದಾಖಲೆಯಂತೆ ಶ್ರೀ ಎಂ.ಎಸ್. ಪಾಟೀಲ್, ಇವರ ಮೇಲಿನ ಆರೋಪದಲ್ಲಿ ಮೇಲ್ನೋಟಕ್ಕೆ ಸತ್ಯಾಂಷವಿರುವುದು ಕಂಡುಬಂದಿರುವುದರಿಂದ ಸದರಿಯವರ ವಿರುದ್ಧ ವಿಚಾರಣೆ ನಡೆಸಲು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 14-ಎ ಮೇರೆಗೆ ಲೋಕಾಯುಕ್ತರಿಗೆ ವಹಿಸಲು ಕೋರಿದ್ದು, ಅದರಂತೆ ಶ್ರೀ ಎಂ.ಎಸ್.ಪಾಟೀಲ್, ಇವರು ಅಸಮ ಪ್ರಮಾಣದಲ್ಲಿ ಸ್ಥಿರಾಸ್ತಿ ಮತ್ತು ಚರಾಸ್ತಿ ಹೊಂದಿರುವ ಬಗ್ಗೆ ವಿಚಾರಣೆ ನಡೆಸಲು ಮಾನ್ಯ ಲೋಕಾಯುಕ್ತರವರಿಗೆ ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ ವಹಿಸಲಾಗಿತ್ತು.

ಈ ಆದೇಶದ ವಿರುದ್ಧ ಶ್ರೀ ಎಂ.ಎಸ್. ಪಾಟೀಲ್‌ರವರು ತಾವು ಗ್ರೂಪ್ ಎ ಹಿರಿಯ ಶ್ರೇಣಿಯ ಅಧಿಕಾರಿಯಾಗಿದ್ದು, ಮಾನ್ಯ ಲೋಕಾಯುಕ್ತರ ವ್ಯಾಪ್ತಿಯಲ್ಲಿ ಬರುವುದಿಲ್ಲವೆಂದು, ಆದ್ದರಿಂದ ಮೇಲ್ಕಂಡ ಆದೇಶವನ್ನು ಹಿಂಪಡೆಯಬೇಕೆಂದು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿರುತ್ತಾರೆ. ಇದಕ್ಕೆ ಪೂರಕವಾಗಿ ಶ್ರೀ ಎಸ್.ಎನ್. ಹೆಗ್ಗಡೆ ರವರ ರಿಟ್ ಅರ್ಜಿ ಸಂಖ್ಯೆ: 25339-40/ 2003 ದಿನಾಂಕ:04.02.2004ರ ತೀರ್ಪನ್ನು ಉಲ್ಲೇಖಿಸಿರುತ್ತಾರೆ.

ಮೇಲ್ಕಂಡ ಮನವಿಯನ್ನು ಸುಧೀರ್ಘವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 82 ಡಿಜಿಡಿ 2001, ಬೆಂಗಳೂರು, ದಿನಾಂಕ:17ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಂ.ಎಸ್. ಪಾಟೀಲ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕೋಡಿ, ಇವರ ಮೇಲಿನ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಮಾನ್ಯ ಲೋಕಾಯುಕ್ತರಿಗೆ ವಹಿಸಿರುವ ದಿನಾಂಕ:07.10.2004ರ ಆದೇಶವನ್ನು ಹಿಂಪಡೆಯಲಾಗಿದೆ. ಹಾಗೂ ಇವರ ಮೇಲಿನ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14-ಎ ರ ಮೇರೆಗೆ ಮಾನ್ಯ ಉಪಲೋಕಾಯುಕ್ತರವರಿಗೆ ವಹಿಸಿ ಆದೇಶಿಸಿದೆ. ಪ್ರಕರಣದ ಬಗ್ಗೆ ವಿಚಾರಣೆ ನಡೆಸಿ ಆದಷ್ಟು ಬೇಗನೆ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತ ಎಂ. ಭಂಡಾರೆ**

ಪಿ.ಆರ್. 1246

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಸೇ-1,2).

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ಕೋರಮಂಗಲ ಕಲಾನಿಕೇತನ್ ಎಜುಕೇಷನ್ ಸೊಸೈಟಿಯ ಕಲಾನಿಕೇತನ್ ಕಾಲೇಜ್ ಆಫ್ ಎಜುಕೇಷನ್‌ಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** 1. ದಿನಾಂಕ:28.02.2004ರ ಸಂಖ್ಯೆ: ಇಡಿ 287 ಯುಆರ್‌ಸಿ 2004ರ ಸರ್ಕಾರದ ಪತ್ರ.

2. ದಿನಾಂಕ:13.12.2006, ಸಂಖ್ಯೆ:F.SRO/NCTE/B.Ed/ 2005-06/5416ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿನಾಂಕ:24.07.2006ರ ಕಾರ್ಯದರ್ಶಿ, ಕೋರಮಂಗಲ್ ಕಲಾನಿಕೇತನ್ ಎಜುಕೇಷನ್ ಸೊಸೈಟಿ, ಬೆಂಗಳೂರು, ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ ವಿಶ್ವವಿದ್ಯಾಲಯ/ ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ/ ಬಿ.ಇಡಿ/ ಬಿ.ಪಿ.ಎಡ್, ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಂಗಳೂರಿನ ಕೋರಮಂಗಲ ಕಲಾನಿಕೇತನ್ ಎಜುಕೇಷನ್ ಸೊಸೈಟಿಯ ಕಲಾನಿಕೇತನ್ ಕಾಲೇಜ್ ಆಫ್ ಎಜುಕೇಷನ್, ನಂ.42/1, ಎ.ಇ.ಸಿ.ಎಸ್. ಲೇಔಟ್, ಕೂಡ್ಲು, ಹೊಸೂರು ರಸ್ತೆ ಎದುರು, ಬೆಂಗಳೂರು-560068 ಈ ಕಾಲೇಜಿಗೆ ಬಿ.ಎಡ್. ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ:13.12.2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ದಿನಾಂಕ:24.07.2006ರ ಪತ್ರದಲ್ಲಿ ಸದರಿ ಸಂಸ್ಥೆಯ ಕಾರ್ಯದರ್ಶಿಯವರು ತಮ್ಮ ಕಾಲೇಜಿನಲ್ಲಿ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 251 ಯುಬಿವಿ 2006, ಬೆಂಗಳೂರು, ದಿನಾಂಕ:10ನೇ ಆಗಸ್ಟ್, 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರಿನ ಕೋರಮಂಗಲ ಕಲಾನಿಕೇತನ್ ಎಜುಕೇಷನ್ ಸೊಸೈಟಿಯ ಕಲಾನಿಕೇತನ್ ಕಾಲೇಜ್ ಆಫ್ ಎಜುಕೇಷನ್, ನಂ.42/1, ಎ.ಇ.ಸಿ.ಎಸ್. ಲೇಔಟ್, ಕೂಡ್ಲು, ಹೊಸೂರು ರಸ್ತೆ ಎದುರು, ಬೆಂಗಳೂರು-560 068, ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ನಂದಕುಮಾರ್**

ಪಿ.ಆರ್. 1247

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

## ಇಂಧನ ಸಚಿವಾಲಯ

**ವಿಷಯ:** ಇಂಧನ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಕಛೇರಿಯ ಉಪಯೋಗಕ್ಕಾಗಿ ಒಂದು ಹೊಸ ಮಾರುತಿ ಎಸ್ಟಿಮ್ ಕಾರನ್ನು ಖರೀದಿಸಲು ಅನುಮತಿ ನೀಡುವುದು ಹಾಗೂ ಹಳೇ ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ-01-ಜಿ-2264 ನ್ನು ರಾಜ್ಯ ಅತಿಥಿ ಗೃಹಕ್ಕೆ ಒಪ್ಪಿಸುವ ಬಗ್ಗೆ.

**ಓದಲಾಗಿದೆ:**
1. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಧಿಕೃತ ಜ್ಞಾಪನಾ ಸಂಖ್ಯೆ: ಸಿಆಸುಇ 87 ಶಿವಾನೀ 2000 ದಿನಾಂಕ:29.08.2000.
2. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸುತ್ತೋಲೆ ಸಂಖ್ಯೆ: ಸಿಆಸುಇ 19 ಶಿವಾನೀ 2005 ದಿನಾಂಕ:03.06.2005.
3. ವ್ಯವಸ್ಥಾಪಕರು, ಮೆ: ಮಾಂಡವಿ ಮೋಟಾರ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರು ದಿನಾಂಕ:26.07.2006 ರಂದು ಸಲ್ಲಿಸಿರುವ ಪ್ರೊಫಾರ್ಮ ಇನ್‌ವಾಯ್ಸ್.
4. ಸರ್ಕಾರದ ಆದೇಶ ಸಂಖ್ಯೆ: ಇಂಇ 80 ಸಮನ್ವಯ 2006, ದಿನಾಂಕ:04.08.2006.

**ಪ್ರಸ್ತಾವನೆ:**

ಇಂಧನ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಕಛೇರಿಯ ಉಪಯೋಗಕ್ಕಾಗಿ ಇರುವ ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ-01-ಜಿ-2264 (1996ನೇ ಮಾಡಲ್) ಇದ್ದು, ಈ ವಾಹನವು 1,70,000ಕ್ಕೂ ಹೆಚ್ಚು ಕಿಲೋ ಮೀಟರ್ ಕ್ರಮಿಸಿದ್ದು ಇದರ ದುರಸ್ತಿಗಾಗಿ ಈಗಾಗಲೇ ಅಂದಾಜು ರೂ.3,33,224 ಗಳನ್ನು ವೆಚ್ಚ ಮಾಡಲಾಗಿದ್ದು ಈ ವಾಹನವು ಪದೇ ಪದೇ ದುರಸ್ತಿಗೆ ಬರುತ್ತಿದೆ. ಈ ವಾಹನವು ಪ್ರತಿ ಲೀಟರ್‌ಗೆ ಕೇವಲ 7 ಕಿಲೋ ಮೀಟರ್ ಕ್ರಮಿಸುತ್ತಿದ್ದು ಇದು ಮಿತದಾಯಕವಾಗಿರುವುದಿಲ್ಲ ಆದುದರಿಂದ ಪ್ರಧಾನ ಕಾರ್ಯದರ್ಶಿಯವರ ಕಛೇರಿಯ ಉಪಯೋಗಕ್ಕಾಗಿ ಹೊಸ ಮಾರುತಿ ಎಸ್ಟಿಂ ಕಾರ್‌ನ್ನು ಖರೀದಿಸಲು, ಮೇಲೆ ಓದಲಾಗಿರುವ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ರಾಜ್ಯ ಶಿಷ್ಟಾಚಾರ) (1) ಮತ್ತು (2)ರ ಅಧಿಕೃತ ಜ್ಞಾಪನ ಮತ್ತು ಸುತ್ತೋಲೆಯ ಅನ್ವಯ ಇಂಧನ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಕಛೇರಿಯ ಉಪಯೋಗಕ್ಕಾಗಿ ಒಂದು ಮಾರುತಿ ಎಸ್ಟಿಂ ಕಾರನ್ನು DGS & D ದರಗಳಿಗೆ ಒಳಪಟ್ಟು ಖರೀದಿಸಲು ಉದ್ದೇಶಿಸಿ, ಓದಲಾದ (3)ರಲ್ಲಿ ಮೆ: ಮಾಂಡವಿ ಮೋಟಾರ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರಿಂದ ಪ್ರೊಫಾರ್ಮ ಇನ್‌ವಾಯ್ಸ್‌ನ್ನು ದಿನಾಂಕ:27.06.2006 ರಂದು ಪಡೆಯಲಾಗಿದ್ದು ಅದರನ್ವಯ ದರದ ವಿವರವು ಇಂತಿದೆ:

1. Maruti-Esteem MPI VX (BS-III) at DGS & D Rate (without "D" Form)-Rs.4,52,843.60.
2. Maruti-Esteem MPI VX (BS-III) at DGS & D Rate (with "D" Form)-Rs.4,19,560.60

ಮೇಲೆ ಓದಲಾಗಿರುವ (2)ರ ಸುತ್ತೋಲೆ ರನ್ವಯ ಇಲಾಖಾ ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು ಹಾಗೂ ಇಲಾಖಾ ಮುಖ್ಯಸ್ಥರುಗಳಿಗೆ ಹೊಸದಾಗಿ ವಾಹನಗಳನ್ನು ಖರೀದಿಸುವಾಗ DGS & D ದರಗಳಿಗೆ ಒಳಪಟ್ಟು ಮಾರುತಿ ಎಸ್ಟಿಂ ಕಾರ್‌ನ್ನು ಖರೀದಿಸಬಹುದೆಂದು ತಿಳಿಸಿರುವ ಹಿನ್ನೆಲೆಯಲ್ಲಿ ಓದಲಾಗಿರುವ (4)ರ ಆದೇಶ ದಿನಾಮಕ:04.08.2006ರಲ್ಲಿ ಮೆ: ಮಾಂಡವಿ ಮೋಟಾರ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರ ಮುಖಾಂತರ ಇಂಧನ ಇಲಾಖೆಗೆ Maruti-Esteem MPI VX (BS-III) at DGS & D Rate (without "D" Form) ನ್ನು ರೂ.4,52,843.60 ಗಳಿಗೆ ಖರೀದಿಸಲು ಆದೇಶಿಸಲಾಗಿದ್ದು, ಸದರಿ ಆದೇಶವನ್ನು ಹಿಂದಕ್ಕೆ ಪಡೆಯಲಾಗಿದೆ ಹಾಗೂ ಮೆ: ಮಾಂಡವಿ ಮೋಟಾರ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರ ದಿನಾಂಕ:14.08.2006ರ ಕ್ರೆಡಿಟ್ ಬಿಲ್‌ನಲ್ಲಿ ಕೋರಿರುವಂತೆ, ಮೆ: ಮಾರುತಿ ಉದ್ಯೋಗ್ ಲಿಮಿಟೆಡ್, ಗುರುಗಾಂವ್ ಇವರಿಂದ ರೂ.4,52,843.60 ಗಳಿಗೆ (ಮೆ: ಮಾಂಡವಿ ಮೋಟಾರ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರ ಮುಖಾಂತರ) ಸದರಿ ಮಾರುತಿ ಎಸ್ಟೀಂ ಕಾರನ್ನು ಖರೀದಿಸುವ ಸಲುವಾಗಿ ಸರ್ಕಾರವು ಈ ಕೆಳಗಿನಂತೆ ಪರಿಷ್ಕೃತ ಆದೇಶವನ್ನು ಹೊರಡಿಸಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 80 ಸಮನ್ವಯ 2006, ಬೆಂಗಳೂರು, ದಿನಾಂಕ:21ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ಹೇಳಿರುವ ಹಿನ್ನೆಲೆಯಲ್ಲಿ ಇಂಧನ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಕಛೇರಿಯ ಉಪಯೋಗಕ್ಕಾಗಿ ಒಂದು Maruti-Esteem MPI VX (BS-III) at DGS & D Rate (without "D" Form) ಕಾರನ್ನು ರೂ.4,52,843.60 (ನಾಲ್ಕು ಲಕ್ಷದ ಐವತ್ತೆರಡು ಸಾವಿರದ ಎಂಟನೂರಾನಲವತ್ತೂ್ರು ರೂಪಾಯಿ ಮತ್ತು ಪೈಸೆ ಅರವತ್ತು) ಗಳ ವೆಚ್ಚದಲ್ಲಿ ಮೆ: ಮಾರುತಿ ಉದ್ಯೋಗ್ ಲಿಮಿಟೆಡ್, ಗುರುಗಾಂವ್ ಇವರಿಂದ (ಮೆ: ಮಾಂಡವಿ ಮೋಟಾರ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಇವರ ಮುಖಾಂತರ) ಖರೀದಿಸಲು ಅನುಮತಿ ನೀಡಲಾಗಿದೆ ಮತ್ತು ಈ ಮೊದಲು ಓದಲಾದ (4)ರಲ್ಲಿ ಹೊರಡಿಸಲಾದ ಸರ್ಕಾರಿ ಆದೇಶವನ್ನು ಹಿಂದಕ್ಕೆ ಪಡೆಯಲಾಗಿದೆ.

ಹಾಲಿ ಇರುವ ಅಂಬಾಸಿಡರ್ ಕಾರ್ ಸಂಖ್ಯೆ: ಕೆಎ-01-ಜಿ-2264 (1996ನೇ ಮಾಡಲ್) ನ್ನು ರಾಜ್ಯ ಅತಿಥಿ ಗೃಹಕ್ಕೆ ಒಪ್ಪಿಸಲು ಸೂಚಿಸಿದೆ.

ಇದಕ್ಕಾಗಿ ತಗಲುವ ವೆಚ್ಚವನ್ನು 2006-07ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ ಸಂಖ್ಯೆ:2052 Sectt. General Services, 090 Sectt.01 KGS, 195 Transport Expenses ರಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1217 ವೆಚ್ಚ-5/ 2006 ದಿನಾಂಕ:28.07.2006ರಲ್ಲಿ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

ಪಿ.ಆರ್. 1248

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಡಿ.ಜಿ. ಪಟೇಲ, ನಿವೃತ್ತ ಪಿಎಸ್‌ಐ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಡಿ೪/ 50/ ಉವ/ 2000, ದಿನಾಂಕ:21.02.2000 ಮತ್ತು 26.10.2005.

2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:24.05.2000.

3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು 6/ 34/ 2000-2001, ದಿನಾಂಕ:07.02.2001.

4. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ/ 155/ ಸಿಎನ್‌ಎಸ್ 2003, ದಿನಾಂಕ:16.07.2004 ಮತ್ತು 04.04.2005.

**ಪ್ರಸ್ತಾವನೆ:**

ಶ್ರೀ ಡಿ.ಜಿ. ಪಟೇಲ್, ಪಿಎಸ್‌ಐ (ನಿವೃತ್ತ) ಇಂಡಿ ಪೊಲೀಸ್ ಠಾಣೆ, ಬಿಜಾಪುರ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

"ನೀವು ದಿನಾಂಕ:22.05.1999 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದು, ನಿಮಗೆ ದಿನಾಂಕ:15.07.1999 ರಂದು ಪಲಾಯನ ನೋಟೀಸು ಜಾರಿಯಾಗಿದ್ದರೂ ಸಹ ಇನ್ನೂವರೆಗೂ ನೀವು ಕರ್ತವ್ಯಕ್ಕೆ ಹಾಜರಾಗದೇ ಅನಧಿಕೃತವಾಗಿ ಗೈರುಹಾಜರಾಗಿ ಉಳಿದು, ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆ ಹಾಗೂ ಬೇಜವಾಬ್ದಾರಿತನವನ್ನು ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ ಬೆಳಗಾವಿ, ಇವರು ಮೇಲೆ ಕ್ರಮಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:21.02.2000ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಪಿಎಸ್‌ಐ ಹುದ್ದೆಯ ಕನಿಷ್ಟ ವೇತನ ಮಟ್ಟಕ್ಕೆ ತಿಳಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಈ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿ ಆಗಿರುವುದು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುತ್ತದೆ. ಆದರೆ ಕೆಸಿಎಸ್‌ಆರ್‌ನ ನಿಯಮಗಳನ್ವಯ ವೇತನವನ್ನು ಅವರ ಹುದ್ದೆಯ ಕನಿಷ್ಠ ಮಟ್ಟಕ್ಕೆ ಅನಿರ್ಧಿಷ್ಟ ಅವಧಿಗೆ ಅಥವಾ ಖಾಯಂ ಕ್ರಮವಾಗಿ ಇಳಿಸಲು ಅವಕಾಶ ಇರುವುದಿಲ್ಲವಾದ್ದರಿಂದ, ಶಿಸ್ತು ಪ್ರಾಧಿಕಾರಿ ಆದೇಶವನ್ನು ಮಾರ್ಪಡಿಸಲು ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:04.04.2005ರ ತನ್ನ ಪತ್ರದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ರಹಿತವಾಗಿ ಆಗಲಿ ಅಥವಾ ಸಹಿತವಾಗಲಿ ತಡೆಹಿಡಿಯಲು ಅರ್ಜಿದಾರರು ನಿವೃತ್ತಿ ಹೊಂದಿರುವ ಕಾರಣ, ಅನುಷ್ಠಾನಕ್ಕೆ ತರಲು ನಿಯಮಗಳಲ್ಲಿ ಆಸ್ಪದವಿರುವುದಿಲ್ಲ. ಅರ್ಜಿದಾರರು ದಿನಾಂಕ:29.02.2000ರಂದು ನಿವೃತ್ತರಾಗಿರುವ ಹಿನ್ನೆಲೆಯಲ್ಲಿ ಕೆಸಿಎಸ್‌ಆರ್ ನ ನಿಯಮ 214 ರನ್ವಯ ಅರ್ಜಿದಾರರ ನಿವೃತ್ತಿ ವೇತನದಲ್ಲಿ ಶೇಕಡಾ 25ರಂತೆ ಪ್ರತಿ ತಿಂಗಳೂ ಶಾಶ್ವತವಾಗಿ ಕಡಿತಗೊಳಿಸುವಂತೆ ಅಭಿಪ್ರಾಯ ಪಟ್ಟಿರುತ್ತದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 114 ಪೊಸಿಅ 2000, ಬೆಂಗಳೂರು, ದಿನಾಂಕ:11ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:21.02.2000ರ ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ಶ್ರೀ ಡಿ.ಜೆ. ಪಟೇಲ, ನಿವೃತ್ತ ಪಿಎಸ್‌ಐ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:24.05.2000ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪರಿಶೀಲಿಸಿ, ಕೆಸಿಎಸ್‌ಆರ್ ನ ನಿಯಮ 214 ರನ್ವಯ ಅರ್ಜಿದಾರರ ನಿವೃತ್ತಿ ವೇತನದಲ್ಲಿ ಶೇಕಡಾ 25ರಂತೆ ಪ್ರತಿ ತಿಂಗಳೂ ಶಾಶ್ವತವಾಗಿ ಕಡಿತಗೊಳಿಸಲು ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ/ 155/ ಸಿಎನ್‌ಎಸ್ 2003, ದಿನಾಂಕ:04.04.2005ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1249

## ಶಿಕ್ಷಣ ಸಚಿವಾಲಯ

### ತಿದ್ದುಪಡಿ

### ಕ್ರಮಾಂಕ: ಇಡಿ 29 ಯುಬಿವಿ 2006, ಬೆಂಗಳೂರು, ದಿನಾಂಕ:8ನೇ ಆಗಸ್ಟ್, 2006

ದಿನಾಂಕ:29.05.2006ರ ಸರ್ಕಾರಿ ಆದೇಶ ಸಂಖ್ಯೆ: ಇಡಿ 29 ಯುಆರ್‌ಸಿ 2006ರ ವಿಷಯ ಮತ್ತು ಆದೇಶದ ಭಾಗದಲ್ಲಿ ಬೆಂಗಳೂರಿನ ಆರುಳ್ ಸಾಮಿ ಎಜುಕೇಷನಲ್ ಟ್ರಸ್ಟ್‌ನ, ಲೂರ್ಡ್ಸ್ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು, ಈ ಕಾಲೇಜಿಗೆ "2006-07" ಎಂಬುದನ್ನು "2005-06" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎಂ. ನಂದಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

ಪಿ.ಆರ್. 1250

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಒಇ 360 ಪಿಪಿಇ 2006, ಬೆಂಗಳೂರು, ದಿನಾಂಕ:21ನೇ ಆಗಸ್ಟ್, 2006**

ಸರ್ಕಾರದ ಆದೇಶ ನಂ.ಒಇ 87 ಪಿಪಿಇ 2004, ದಿನಾಂಕ:16.05.2006ರ ಕ್ರಮಸಂಖ್ಯೆ:108ರ ಕಲಂ 2ರಲ್ಲಿ ನಮೂದಿಸಿರುವ ಅಧೀಕ್ಷಕರು, ಪ್ರಥಮದರ್ಜೆ ಸಹಾಯಕರು ಮತ್ತು ಅಟೆಂಡರ್ ಹುದ್ದೆಗಳ ಎದುರು ಅಂಕಣ 4ರಲ್ಲಿ "ಸರ್ಕಾರಿ ಅಭಿಯೋಜಕರ ಕಛೇರಿ, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ" ಎಂದು ನಮೂದಾಗಿರುವುದನ್ನು "ಸರ್ಕಾರಿ ಅಭಿಯೋಜಕರ ಕಛೇರಿ, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ದಾವಣಗೆರೆ" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 1251

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು)

**INFRASTRUCTURE DEVELOPMENT SECRETARIAT**

**Sub:** Release of funds towards the 5th draw down of the State Support to Bangalore International Airport Project.

**Read:** 1. G.O. No.IDD 11 DIA 2005 Dated:22.06.2005.
2. G.O. No.IDD 11 DIA 2005, Dated:16.09.2005.
3. G.O. No.IDD 11 DIA 2005 Dated:20.12.2005.
4. G.O. No.IDD 11 DIA 2005 Dated:27.03.2006.
5. G.O. No.IDD 11 DIA 05, Dated:31.03.2006.
6. Letter No. SFS.05/ 2006-07, Dated:20.07.2006 of the CEO, BIAL.

**Preamble:**

Government have released funds towards 1st to 4th draw down of the State Support to BIAP vide G.O.'s read at Sl.Nos.1 to 5 and as explained in G.O. Dated:31.03.2006 read at Sl.No.5 above.

In the letter Dated:20.07.2006 read at Sl.No.6 above, the Chief Executive Officer, BIAL, has requested for release of an amount of Rs.24.26 crores towards the 5th instalment of the draw down schedule. To facilitate release of this amount i.e.5th draw down instalment, following orders are issued.

**Government Order No. IDD 11 DIA 2005, Bangalore, Dated:19th August, 2006**

Government after careful examination of the proposal agrees to release a sum of Rs.24.26 crores (Rupees twenty four crores and twenty six lakhs only) towards the 5th draw down of the state support to BIAP from the Head of Account "5465-01-190-2-02 (P) BIAL State Support to Project, 100-Financial Assistance / Relief" out of the budget provision of Rs.123.85 crores in 2006-07.

2. The CMD, KSIIDC is authorized to draw the above amount of Rs.24.26 crores (Rupees twenty four crores and twenty six lakhs) only on a payees receipt payees receipt counter signed by the Under Secretary to Government, Infrastucture Development Department.

3. This order issues with the concurrence of Finance Department in U.O. Note No.FD 1467 Exp.I/06, Dated:17.08.2006.

By Order and in the Name of the Governor of Karnataka,

**N. MANJULA GEETA**

PR-1252

Under Secretary to Government,

Infrastructure Development Department.

**Sub:** Release of funds to KSIIDC towards Equity Share Capital of Bangalore International Airport Ltd.

**Read:** 1. G.O. No.IDD 14 DIA 2002 Dated:08.07.2004.
2. G.O. No.IDD 41 DIA 2005, Dated:22.09.2005.
3. G.O. No.IDD 41 DIA 2005 Dated:03.01.2006.
4. G.O. No.IDD 41 DIA 2005(p) Dated:27.03.2006.
5. Letter No. AGM (BIAP)/ 1683/2006-07, Dated:03.08.2006 of the CMD, KSIIDC.

**Preamble:**

In Government Orders read at Sl.No. 1 to 4 Government have released funds to KSIIDC for 1st to 4th draw down of the schedule towards investment in the equity share capital in Bangalore International Airport Ltd.

2. The CMD, KSIIDC in letter Dated:03.08.2006 read at Sl.No.5 above, has requested to release of an amount of Rs.3.78 crores (Rupees Three crores and Seventy Eight lakhs) only towards the 5th draw down contribution of Government of Karnataka to the equity share capital in BIAL based on the construction budget of rs.181.47 crores for the quarter July-September 2006.

**Government Order No. IDD 41 DIA 2005, Bangalore, Dated:19th August, 2006**

After careful examination of the above proposal, Government are pleased to release a sum of Rs.3.78 crores (Rupees Three crores and Seventy Eight lakhs) only to KSIIDC under the Head of account "5465-01-190-2-01-211-KSIIDC Investment (Plan) " being the 5th drawal of equity contribution of Government of Karnataka during 2006-07 to BIAL as per agreement against the budget provision of Rs.10.78 crores.

2. The CMD, KSIIDC is authorized to draw the amount on a payee's receipt countersigned by the Under Secretary to Government, Infrastructure Development Department.

3. This order issued with the concurrence of Finance Department vide its U.O. Note No.FD 1482 Exp.I/06, Dated:17.08.2006.

By Order and in the Name of the Governor of Karnataka,

**N. MANJULA GEETHA**

PR-1253

Under Secretary to Government,
Infrastructure Development Department.

## ENERGY SECRETARIAT

**Sub:** Transfer of 0.8 MW Wind Power Capacity in favour of M/s Protectron Electromech Pvt. Ltd.-reg.

**Read:** 1. Government Order No.EN 319 NCE 2005, Dated:25.10.2005.

2. Letter No. KRED/ 08/ PEPL/ 2006/ 1769 Dated::02.08.2006 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, sanction has been accorded for implementation of 16.00 MW capacity Wind Power Project at Gadag District to M/s Enercon (India) Limited.

Now, the Managing Director, Karnataka Renewable Energy Development Limited, Bangalore, in his letter Dated:02.08.2006 read at (2) above, has recommended to the Government for transfer of 0.8 MW Wind Power capacity in favour of M/s Protectron Electromech Pvt. Ltd. at Ranathur village of Shirhatti Taluk, Gadag District from out of the Sanctioned 16.00 MW capacity of M/s Enercon (India) Limited.

The proposal has been examined at the Government level and hence the following order:

**Government Order No. EN 350 NCE 2006, Bangalore, Dated:10th August, 2006**

Government is pleased to accord transfer of 0.8 MW Wind Power capacity in favour of **M/s Protectron Electromech Pvt. Ltd.** at Ranathur village of Shirhatti Taluk, Gadag District from out of the sanctioned 16.00 MW capacity of M/s Enercon (India) Limited.

The terms and conditions of the concerned allotment Order shall **IPSOFACTO** applicable.

By Order and in the Name of the Governor of Karnataka,

**M. LOKARAJ**

PR-1254

Joint Secretary to Government,
Energy Department.

**Sub:** Transfer of 0.8 MW Wind Power Capacity in favour of M/s Vikram Traders-reg.

**Read:** 1. Government Order No.:EN 319 NCE 2005, Dated:25.10.2005.

2. Letter No. KRED/ 08/ VT/ 2006/ 1770 Dated:02.08.2006 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, sanction has been accorded for implementation of 16.00 MW capacity Wind Power Project at Gadag District to M/s Enercon (India) Limited.

Now, the Managing Director, Karnataka Renewable Energy Development Limited, Bangalore, in his letter Dated:02.08.2006 read at (2) above, has recommended to the Government for transfer of 0.8 MW Wind Power capacity in favour of M/s Vikram Traders at Machinahalli village of Shirhatti Taluk, Gadag District from out of the Sanctioned 16.00 MW capacity of M/s Enercon (India) Limited.

The proposal has been examined at the Government level and hence the following order:

**Government Order No. EN 349 NCE 2006, Bangalore, Dated:10th August, 2006**

Government is pleased to accord transfer of 0.8 MW Wind Power capacity in favour of **M/s Vikram Traders** at Machinahalli village of Shirhatti Taluk, Gadag District from out of the sanctioned 16.00 MW capacity of M/s Enercon (India) Limited.

The terms and conditions of the concerned allotment Order shall **IPSOFACTO** applicable.

By Order and in the Name of the Governor of Karnataka,

**M. LOKARAJ**

PR-1255

Joint Secretary to Government,
Energy Department.

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಶ್ರೀ ಕೆ.ಎಂ. ನಾಗಭೂಷಣಯ್ಯ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ) ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಡಿ ಕ್ರಮ ಕೈಗೊಳ್ಳುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 10 ಸೇಇವಿ 2006, ಬೆಂಗಳೂರು, ದಿನಾಂಕ:21ನೇ ಆಗಸ್ಟ್, 2006**

ಶ್ರೀ ಕೆ.ಎಂ. ನಾಗಭೂಷಣಯ್ಯ, ನಿವೃತ್ತ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ರವರು ಸಣ್ಣ ನೀರಾವರಿ ಉಪ ವಿಭಾಗ, ಬಳ್ಳಾರಿ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಜವಕು ಏತ ನೀರಾವತಿ ಯೋಜನೆಯ ಅಪ್ರೋಚ್ ರಸ್ತೆ ನಿರ್ಮಾಣ ಕಾಮಗಾರಿಯು ಪೂರ್ಣವಾಗದೆ ಇದ್ದರೂ ಬರಪರಿಹಾರ ಯೋಜನೆಯಡಿ ಕಾಮಗಾರಿಯನ್ನು ನಿರ್ಮಿಸಲಾಗಿದೆ ಎಂದೂ ಮತ್ತು ಇದೇ ಏತ ನೀರಾವರಿ ಯೋಜನೆ ಜಾಕ್‌ವೆಲ್‌ನಿಂದ ಹಳ್ಳದ ಮೇಲ್ಭಾಗದಲ್ಲಿ ಮತ್ತು ತಳಭಾಗದಲ್ಲಿ ಹೂಳು ಮತ್ತು ಜಂಗಲ್ ಅನ್ನು ತೆಗೆದಿರುವುದಾಗಿ ಅಳತೆ ಪುಸ್ತಕದಲ್ಲಿ ಸುಳ್ಳು ಮಾಹಿತಿಯನ್ನು ದಾಖಲಿಸುವುದರ ಮೂಲಕ ತೀವ್ರ ಸ್ವರೂಪದ ದುರ್ನಡತೆಯನ್ನು ಎಸಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದಲೂ

ಮೇಲ್ಕಂಡ ದುರ್ನಡತೆಗಳಿಗಾಗಿ ಶ್ರೀ ಕೆ.ಎಂ. ನಾಗಭೂಷಣಯ್ಯ, ನಿವೃತ್ತ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ರವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಬೇಕೆಂದು ಸರ್ಕಾರ ಭಾವಿಸಿರುವುದರಿಂದಲೂ

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ 214ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ.ಎಂ. ನಾಗಭೂಷಣಯ್ಯ, ನಿವೃತ್ತ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಾವಳಿಗಳು ನಿಯಮ 11, 11-ಎ ರಲ್ಲಿ ನಿಗಧಿಪಡಿಸಿರುವ ಕಾರ್ಯ ವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1256

ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಬಾಗಲಕೋಟೆಯ ಎಸ್. ನಿಜಲಿಂಗಪ್ಪ ಮೆಡಿಕಲ್ ಕಾಲೇಜಿಗೆ ಶವ ಪರೀಕ್ಷೆ ನಡೆಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಪ್ರಾಂಶುಪಾಲರು, ಎಸ್.ನಿಜಲಿಂಗಪ್ಪ ಮೆಡಿಕಲ್ ಕಾಲೇಜು, ಬಾಗಲಕೋಟೆ ಇವರ ಪತ್ರ ದಿನಾಂಕ:25.03.2006.

2. ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಂಇಎಸ್(2) 32/ 2005-06, ದಿನಾಂಕ:03.03.2006.

3. ದಿನಾಂಕ:15.06.2006 ಸಂಖ್ಯೆ: ಅಪರಾಧ/ 31/ ಎಸ್.ಎಂ.ಎಸ್(5)/ 2006ರ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ.

**ಪ್ರಸ್ತಾವನೆ:**

1) ಮೇಲೆ ಕ್ರಮಸಂಖ್ಯೆ: (1)ರಲ್ಲಿ ಓದಲಾದ ಪತ್ರದಲ್ಲಿ ಬಾಗಲಕೋಟೆಯ ಎಸ್.ನಿಜಲಿಂಗಪ್ಪ ಮೆಡಿಕಲ್ ಕಾಲೇಜಿನ ಪ್ರಾಂಶುಪಾಲರು ಅವರ ಕಾಲೇಜಿನ ಆಸ್ಪತ್ರೆಯಲ್ಲಿ ಮರಣೋತ್ತರ ಶವ ಪರೀಕ್ಷೆ ನಡೆಸಲು ಅನುಮತಿ ನೀಡುವಂತೆ ಕೋರಿರುತ್ತಾರೆ. ಈ ಬಗ್ಗೆ ಮೇಲೆ ಕ್ರಮಸಂಖ್ಯೆ: (2)ರಲ್ಲಿ ಓದಲಾದ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯದ ವಿಧಿವೈದ್ಯ ಶಾಸ್ತ್ರ ವಿಭಾಗದ ಮುಖ್ಯಸ್ಥರಿಂದ ಬಾಗಲಕೋಟೆಯ ಎಸ್.ನಿಜಲಿಂಗಪ್ಪ ಮೆಡಿಕಲ್ ಕಾಲೇಜಿನ ತಪಾಸಣೆ ನಡೆಸಿ, ಸದರಿ ಸಂಸ್ಥೆಯು ಸಾಕಷ್ಟು ಪ್ರಮಾಣದಲ್ಲಿ ಮೂಲಭೂತ ಸೌಲಭ್ಯಗಳನ್ನು ಹೊಂದಿದ್ದು ಹಾಗೂ ಎಲ್ಲಾ ರೀತಿಯಲ್ಲೂ ಮೆಡಿಕೋ ಲೀಗಲ್ ಶವ ಪರೀಕ್ಷೆ ಅಧ್ಯಯನ ಮಾಡಲು ವಿದ್ಯಾರ್ಥಿಗಳಿಗೆ ಪ್ರಾಯೋಗಿಕ ತರಬೇತಿ ನೀಡಲು ಅನುಮತಿ ನೀಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೇ ಮೇಲೆ ಕ್ರಮಸಂಖ್ಯೆ (3)ರಲ್ಲಿ ಓದಲಾದ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಬಾಗಲಕೋಟೆಯ ಎಸ್.ಪಿ.ರವರಿಂದ ವರದಿ ಪಡೆದು ಸದರಿ ಸಂಸ್ಥೆಯು ರಾಷ್ಟ್ರೀಯ ಮಾನವ ಹಕ್ಕು ಆಯೋಗದ ಮತ್ತು ಬ್ಯೂರೋ ಆಫ್ ಪೊಲೀಸ್ ರಿಸರ್ಚ್ ಅಂಡ್ ಡೆವಲಪ್‌ಮೆಂಟ್‌ನ ಕೆಲವು ಮುಖ್ಯವಾದ ಸೂಚನೆ ಹಾಗೂ ನಿಯಮಗಳಂತೆ ಮೂಲಭೂತ ಸೌಲಭ್ಯಗಳನ್ನು ಅಳವಡಿಸಿರುವುದರಿಂದ ಮರಣೋತ್ತರ ಶವಪರೀಕ್ಷೆ ನಡೆಸಲು ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆಂದು ತಿಳಿಸಿರುತ್ತಾರೆ.

2) ಮೇಲ್ಕಂಡ ಶಿಫಾರಸ್ಸನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಮೇಲ್ಕಂಡ ವೈದ್ಯಕೀಯ ಕಾಲೇಜಿನ ಆಸ್ಪತ್ರೆಗೆ ಸದರಿ ಆಸ್ಪತ್ರೆಯಲ್ಲಿ ಮರಣದಿಂದ ಉಂಟಾಗುವ ಶವಗಳ ಮರಣೋತ್ತರ ಪರೀಕ್ಷೆಯನ್ನು ನಡೆಸಲು ಅನುಮತಿ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 175 ಎಂಪಿಎಸ್ 2006, ಬೆಂಗಳೂರು, ದಿನಾಂಕ:2ನೇ ಆಗಸ್ಟ್, 2006**

3) ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಬಾಗಲಕೋಟೆಯ ಎಸ್.ನಿಜಲಿಂಗಪ್ಪ ಮೆಡಿಕಲ್ ಕಾಲೇಜಿನಲ್ಲಿ ಮರಣದಿಂದ ಉಂಟಾಗುವ ಶವಗಳನ್ನು ಸದರಿ ಕಾಲೇಜಿನ ವಿದ್ಯಾರ್ಥಿಗಳ ಪ್ರಾಯೋಗಿಕ ತರಬೇತಿಗಾಗಿ ಮರಣೋತ್ತರ ಶವ ಪರೀಕ್ಷೆಯನ್ನು ನಡೆಸಲು ಈ ಕೆಳಕಂಡ ಷರತ್ತುಗಳೊಂದಿಗೆ ಅನುಮತಿ ನೀಡಿದೆ.

1. ಮರಣೋತ್ತರ ಪರೀಕ್ಷೆಗಾಗಿ ಯಾವುದೇ ಶುಲ್ಕವನ್ನು ಮೃತರ ಕುಟುಂಬದಿಂದ ಅಥವಾ ಬಂಧುಬಾಂಧವರಿಂದ ವಸೂಲಿ ಮಾಡಬಾರದು.
2. ಮರಣೋತ್ತರ ಶವ ಪರೀಕ್ಷೆಯ ನಂತರ ರಾಸಾಯನಿಕ ಪರೀಕ್ಷೆಗಾಗಿ ಆಯ್ದ ಭಾಗಗಳನ್ನು ಆರಕ್ಷಕರು ಸೂಚಿಸಿದ ಸ್ಥಳದಲ್ಲಿಯೇ ನಿರ್ವಹಿಸುವುದು.
3. ಕಾಲಕಾಲಕ್ಕೆ ಸರ್ಕಾರವು ನಿಗದಿಪಡಿಸಿದ ಆಸ್ಪತ್ರೆಯ ಕರ್ತವ್ಯದ ಅವಧಿಯಲ್ಲಿ ಆರಕ್ಷಕರಿಂದ ಪಂಚನಾಮೆ ನಡೆಸಿ ಮರಣೋತ್ತರ ಶವ ಪರೀಕ್ಷೆ ನಡೆಸುವುದು.
4. ಮರಣ ಕಾರಣ, ಇತ್ಯಾದಿ ಮರಣೋತ್ತರ ಪರೀಕ್ಷಾ ವರದಿಗಳನ್ನು ನಿಗದಿತ ಸಮಯದೊಳಗೆ ತಯಾರಿಸಿ, ಸಂಬಂಧಪಟ್ಟ ಆರಕ್ಷಕ ಠಾಣೆಗೆ ಸಲ್ಲಿಸುವುದು.
5. ಮೆಡಿಕೋ ಲೀಗಲ್ ತಜ್ಞರ ಪ್ರಮಾಣ ಪತ್ರವನ್ನು (Expert Opinion) ಸದರಿ ಮಹಾವಿದ್ಯಾಲಯದ ವಿಧಿವೈದ್ಯಶಾಸ್ತ್ರ ಪ್ರಾಧ್ಯಾಪಕರ ಹುದ್ದೆಯನ್ನು ಹೊಂದಿದವರು ಮಾತ್ರ ನೀಡುವುದು.
6. ಮರಣೋತ್ತರ ಶವ ಪರೀಕ್ಷೆಗೆ ಆಗುವ ಆರ್ಥಿಕ ಹೊರೆಯನ್ನು ಸರ್ಕಾರದಿಂದ ಭರಿಸಲಾಗುವುದಿಲ್ಲ.
7. ಸಾಕ್ಷ್ಯಾಧಾರ ಒದಗಿಸುವ ಸಲುವಾಗಿ ನ್ಯಾಯಾಲಯಗಳಿಗೆ ಹಾಜರಾಗುವ ಸಂಬಂಧ ಯಾವುದೇ ಭತ್ಯೆಯನ್ನು ಸರ್ಕಾರ ಭರಿಸುವುದಿಲ್ಲ.
8. ಶವ ಪರೀಕ್ಷೆ ನಡೆಸಿದ ತಜ್ಞರು ಉದ್ಯೋಗದಲ್ಲಿ ಮುಂದುವರೆಯದಿದ್ದರೂ ಸಹ ನ್ಯಾಯಾಲಯಕ್ಕೆ ಸಾಕ್ಷ್ಯಾಧಾರ ನೀಡಲು ಹಾಜರು ಪಡಿಸುವ ಜವಾಬ್ದಾರಿ ಸದರಿ ವೈದ್ಯಕೀಯ ಮಹಾವಿದ್ಯಾಲಯದ್ದಾಗಿರುತ್ತದೆ.
9. ಮೆಡಿಕೊ ಲೀಗಲ್ ಪ್ರಕರಣಗಳಲ್ಲಿ ಕಾಯ್ದಿರಿಸಿದ ವಸ್ತುಗಳನ್ನು ವಿಧಿವೈದ್ಯಶಾಸ್ತ್ರ ವಿಭಾಗದ ಪ್ರಾಧ್ಯಾಪಕರು ವಿಶ್ಲೇಷಿಸಿ, ಅಭಿಪ್ರಾಯ ನೀಡುವ ಸಲುವಾಗಿ ಅಗತ್ಯವಾದ ಪ್ರಯೋಗಾಲಯವನ್ನು ಸ್ಥಾಪಿಸಿ, ಅದಕ್ಕೆ ರಾಷ್ಟ್ರೀಯ ಅಕ್ರಿಡೇಷನ್ ಮಾನ್ಯತೆಯನ್ನು ಹೊಂದತಕ್ಕದ್ದು.

4) ಮೇಲ್ಕಂಡ ಷರತ್ತು ಮತ್ತು ನಿಬಂಧನೆಗಳಲ್ಲದೆ ಸರ್ಕಾರ/ ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ/ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕಾಲಕಾಲಕ್ಕೆ ಹೊರಡಿಸುವ ಸ್ಥಾಯಿ ಆದೇಶಗಳನ್ನು/ ಸೂಚನೆಗಳನ್ನು ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್. 1257

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ವೈದ್ಯಕೀಯ ಶಿಕ್ಷಣ).

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ಸಿ.ಎಂ. ಮಲ್ಲಿಕಾರ್ಜುನ, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು, ಶ್ರೀ ಬಿ. ಜಯಪ್ಪ, ನಿವೃತ್ತ ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಶಿವಮೊಗ್ಗ ಹಾಗೂ ಶ್ರೀ ಎ. ಕೃಷ್ಣಪ್ಪ, ನಿವೃತ್ತ ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಕೋಲಾರ ಇವರ ಮೇಲೆ ಲೋಕಾಯುಕ್ತ ವಿಚಾರಣೆ ಬಗ್ಗೆ.

**ಓದಲಾಗಿದೆ:** 1. ನಿಬಂಧಕರು, ಕರ್ನಾಟಕ ಲೋಕಾಯುಕ್ತರವರ ಪತ್ರಸಂಖ್ಯೆ:Compt/ Uplok/ BCD-39/1999-2000 ARE-4, ದಿನಾಂಕ:26.11.2001.

2. ಸರ್ಕಾರದ ಆದೇಶ ಸಂಖ್ಯೆ: ಆನಾಸ 104 ಕಾಮಾಸೇ 2001, ದಿನಾಂಕ:06.03.2003.
3. ಹೆಚ್ಚುವರಿ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರಸಂಖ್ಯೆ:ಲೋಕ್/ ಎಆರ್‌ಇ-1/ ಇಎನ್‌ಕ್ಯೂ-143/ 2002-03, ದಿನಾಂಕ:30.04.2003.
4. ಸರ್ಕಾರದ ಆದೇಶ ಸಂಖ್ಯೆ: ಆನಾಸ 104 ಕಾಮಾಸೇ 2001, ದಿನಾಂಕ:16.06.2003.
5. ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರಸಂಖ್ಯೆ: ಲೋಕ್/ ಎಆರ್‌ಇ-1/ ಇಎನ್‌ಕ್ಯೂ-143/ 2002-03, ದಿನಾಂಕ:20.05.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರದೊಂದಿಗೆ ಮಾನ್ಯ ಉಪಲೋಕಾಯುಕ್ತರ ದಿನಾಂಕ:21.11.2001ರ ವರದಿಯನ್ನು ಕಳುಹಿಸಿರುತ್ತಾರೆ. ಆ ವರದಿಯಲ್ಲಿ ತಿಳಿಸಿರುವಂತೆ ಶ್ರೀ ಸಿ.ಎಂ. ಮಲ್ಲಿಕಾರ್ಜುನ, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು ಇವರ ಮೌಖಿಕ ಹೇಳಿಕೆಯಂತೆ, ಕಾನೂನು ಮಾಪನಶಾಸ್ತ್ರ ಇಲಾಖೆಯ ಶಿವಮೊಗ್ಗ, ಚಿತ್ರದುರ್ಗ, ತುಮಕೂರು ಮತ್ತು ಕೋಲಾರ ಜಿಲ್ಲೆಗಳ ಸಹಾಯಕ ನಿಯಂತ್ರಕರ ಕಛೇರಿಗಳಿಗೆ ಕ್ರಮವಾಗಿ ರೂ.24,350/-, ರೂ.38,945/-, ರೂ.37,325/- ಹಾಗೂ ರೂ.23,523/-ಗಳ ಪೀಠೋಪಕರಣಗಳನ್ನು ಖರೀದಿಸಲು ಪ್ರಸ್ತಾವನೆಯನ್ನು 1996-97ರ ಆರ್ಥಿಕ ವರ್ಷದ ಅಂತ್ಯದಲ್ಲಿ ಸಲ್ಲಿಸಿರುವುದಾಗಿ ತಿಳಿಸಿದ್ದಾರೆ. ಅಲ್ಲದೆ, ಶ್ರೀ ಸಿ.ಎಂ. ಮಲ್ಲಿಕಾರ್ಜುನರವರು, ಶ್ರೀ ಬಿ. ಜಯಪ್ಪ, ಶ್ರೀ ಎಲ್. ಚಂದ್ರಶೇಖರ ಹಾಗೂ ಶ್ರೀ ಎ. ಕೃಷ್ಣಪ್ಪ ರೊಂದಿಗೆ ಶಾಮೀಲಾಗಿ, ನಿಯಮಗಳನ್ನು ಹಾಗೂ ಉಪನಿಯಮಗಳನ್ನು ಪಾಲಿಸದೇ, ಪೀಠೋಪಕರಣಗಳ ವಾಸ್ತವಿಕ ಅವಶ್ಯಕತೆ ಪರಿಶೀಲಿಸದೇ, ತಮಗೆ ಇಲ್ಲದ ಆರ್ಥಿಕ ಅಧಿಕಾರವನ್ನು ಮೀರಿ ಮಂಜೂರಾತಿ ಆದೇಶ ಹೊರಡಿಸಿರುತ್ತಾರೆಂದೂ ತಿಳಿಸಿರುತ್ತಾರೆ. ಅದೇ ರೀತಿ ಶ್ರೀ ಸಿ.ಎಂ.ಮಲ್ಲಿಕಾರ್ಜುನರವರು

ಬೆಂಗಳೂರು ವಿಭಾಗದ ಉಪನಿಯಂತ್ರಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ರೂ.13,319/-ಗಳ ಪೀಠೋಪಕರಣಗಳನ್ನು ನಿಯಮಾವಳಿಗಳನ್ನು ಪಾಲಿಸದೇ ಖರೀದಿ ಮಾಡಿರುತ್ತಾರೆಂದು, ಶ್ರೀ ಬಿ. ಜಯಪ್ಪನವರು, ಶ್ರೀ ಮಲ್ಲಿಕಾರ್ಜುನವರ ಜೊತೆಗೆ ಷಾಮೀಲಾಗಿ ರೂ.24,350/-ಗಳ ಹಾಗೂ ರೂ.36,846/-ಗಳ ಪೀಠೋಪಕರಣಗಳನ್ನು ಖರೀದಿಸಲು ನಿಯಮಾವಳಿಗಳನ್ನು ಉಲ್ಲಂಘಿಸಿರುತ್ತಾರೆಂದೂ, ಶ್ರೀ ಎ. ಕೃಷ್ಣಪ್ಪನವರು, ಶ್ರೀ ಮಲ್ಲಿಕಾರ್ಜುನ ಅವರ ಜೊತೆ ಷಾಮೀಲಾಗಿ ರೂ.23,523/-ಗಳ ಪೀಠೋಪಕರಣಗಳನ್ನು ಅವರ ಕಛೇರಿಗೆ ನಿಯಮಾವಳಿಗಳನ್ನು ಪಾಲಿಸದೇ ಖರೀದಿ ಮಾಡಿರುತ್ತಾರೆಂದು ವರದಿ ಮಾಡಿರುತ್ತಾರೆ.

ಶ್ರೀ ಎಲ್. ಚಂದ್ರಶೇಖರ್‌ರವರು ದಿನಾಂಕ:31.05.2001ರಂದು ನಿವೃತ್ತರಾಗಿರುವುದರಿಂದ, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214(2) (ಬಿ) (ii) ರನ್ವಯ ಬರುವುದಿಲ್ಲವಾದ್ದರಿಂದ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಉಳಿದ ಅಧಿಕಾರಿಗಳಾದ ಶ್ರೀ ಸಿ.ಎಂ. ಮಲ್ಲಿಕಾರ್ಜುನ, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು, ಶ್ರೀ ಬಿ. ಜಯಪ್ಪ, ಸಹಾಯಕ ನಿಯಂತ್ರಕರು, ಶಿವಮೊಗ್ಗ ಹಾಗೂ ಶ್ರೀ ಎ. ಕೃಷ್ಣಪ್ಪ, ಸಹಾಯಕ ನಿಯಂತ್ರಕರು, ಕೋಲಾರ ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 14-ಎ ರನ್ವಯ ಇವರ ಮೇಲೆ ವಿಚಾರಣೆ ನಡೆಸಲು ಹಾಗೂ ಕರ್ನಾಟಕ ಲೋಕಾಯುಕ್ತ ಕಾಯ್ದೆ ನಿಯಮ 12(4)ರನ್ವಯ ಉಪಲೋಕಾಯುಕ್ತರಿಗೆ ವಹಿಸಬೇಕೆಂದು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಸಿ.ಎಂ. ಮಲ್ಲಿಕಾರ್ಜುನ, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ (ಸ್ವತಂತ್ರ ಪ್ರಭಾರ) ಬೆಂಗಳೂರು ವಿಭಾಗ, ಬೆಂಗಳೂರು, ಶ್ರೀ ಬಿ. ಜಯಪ್ಪ, ನಿವೃತ್ತ ಸಹಾಯಕ ನಿಯಂತ್ರಕರು (ಸ್ವ.ಪ್ರ) ಕಾರವಾರ, ಶ್ರೀ ಎ. ಕೃಷ್ಣಪ್ಪ, ಸಹಾಯಕ ನಿಯಂತ್ರಕರು (ಸ್ವ.ಪ್ರ.), ಕೋಲಾರ ಇವರ ವಿರುದ್ಧ ಮಾಡಲಾದ ಆರೋಪಗಳ ಬಗ್ಗೆ ಶಿಸ್ತು ಕ್ರಮ ಜರುಗಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14(ಎ) ಮೇರೆಗೆ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ಲೋಕಾಯುಕ್ತರಿಗೆ ವಹಿಸಿಕೊಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಕರ್ನಾಟಕ ಲೋಕಾಯುಕ್ತದ ಹೆಚ್ಚುವರಿ ನಿಬಂಧಕರು ಇವರ ಪತ್ರದಲ್ಲಿ ಶ್ರೀ ಬಿ. ಜಯಪ್ಪನವರು ಸೇವೆಯಿಂದ ದಿನಾಂಕ:31.01.2003ರಂದು ನಿವೃತ್ತರಾಗಿರುವುದರಿಂದ, ಇವರ ಮೇಲಿನ ವಿಚಾರಣೆಯನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳು (ಸಿಸಿಎ) ನಿಯಮ 214-ಎ ರಡಿ ಕರ್ನಾಟಕ ಲೋಕಾಯುಕ್ತರವರಿಗೆ ವಹಿಸಬೇಕಾಗಿರುವುದರಿಂದ, ಅದರಂತೆ ದಿನಾಂಕ:06.03.2003ರ ಆದೇಶವನ್ನು ಮಾರ್ಪಡಿಸಿ ಹೊರಡಿಸಬೇಕೆಂದು ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಆದೇಶದಲ್ಲಿ ದಿನಾಂಕ:06.03.2003ರ ಸರ್ಕಾರಿ ಆದೇಶವನ್ನು ಮಾರ್ಪಡಿಸಿ ಶ್ರೀ ಬಿ. ಜಯಪ್ಪ ಮತ್ತು ಶ್ರೀ ಎ.ಕೃಷ್ಣಪ್ಪ, ನಿವೃತ್ತ ಸಹಾಯಕ ನಿಯಂತ್ರಕರುಗಳು (ಸ್ವತಂತ್ರ ಪ್ರಭಾರ) ಇವರಿಗೆ ಸಂಬಂಧಿಸಿದಂತೆ, ಶಿಸ್ತು ಕ್ರಮ ಜರುಗಿಸಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿ ಮಂಜೂರಾತಿ ನೀಡಿ ಆದೇಶ ಹೊರಡಿಸಲಾಗಿದೆ.

ಮೇಲೆ (5)ರಲ್ಲಿ ಓದಲಾದ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರದ ಜೊತೆಗೆ ಲಗತ್ತಿಸಲಾದ ಲೋಕಾಯುಕ್ತ ವಿಚಾರಣಾ ವರದಿಯಲ್ಲಿ ಶ್ರೀ ಸಿ.ಎಂ. ಮಲ್ಲಿಕಾರ್ಜುನ, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು, ಶ್ರೀ ಬಿ. ಜಯಪ್ಪ, ನಿವೃತ್ತ ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಹಾಗೂ ಶ್ರೀ ಎ. ಕೃಷ್ಣಪ್ಪ, ನಿವೃತ್ತ ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಇವರುಗಳ ಮೇಲೆ ಮಾಡಲಾದ ಆರೋಪಗಳ ಬಗ್ಗೆ ಸುದೀರ್ಘವಾಗಿ ಪರಿಶೀಲಿಸಿ ಇವರ ಮೇಲೆ ಮಾಡಲಾದ ಆರೋಪಗಳಿಂದ ಇವರುಗಳನ್ನು ಮುಕ್ತಗೊಳಿಸಿ ದೋಷಮುಕ್ತರೆಂದು ವರದಿ ಸಲ್ಲಿಸಿರುತ್ತಾರೆ.

ಲೋಕಾಯುಕ್ತರವರ ವರದಿಯನ್ನು ಆಧರಿಸಿ ಇವರ ಮೇಲೆ ಮಾಡಲಾದ ಆರೋಪಗಳನ್ನು ಕೈಬಿಡಲು ಸರ್ಕಾರ ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 104 ಕಾಮಾಸೇ 2001, ಬೆಂಗಳೂರು, ದಿನಾಂಕ:16ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಕಾನೂನು ಮಾಪನಶಾಸ್ತ್ರ ಇಲಾಖೆಯ ಅಧಿಕಾರಿಗಳಾದ ಶ್ರೀ ಸಿ.ಎಂ. ಮಲ್ಲಿಕಾರ್ಜುನ, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು, ಶ್ರೀ ಬಿ. ಜಯಪ್ಪ, ನಿವೃತ್ತ ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಹಾಗೂ ಶ್ರೀ ಎ. ಕೃಷ್ಣಪ್ಪ, ನಿವೃತ್ತ ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಇವರುಗಳನ್ನು ಲೋಕಾಯುಕ್ತರವರ ವರದಿಯಲ್ಲಿ ದೋಷಮುಕ್ತರೆಂದು ಪರಿಗಣಿಸಿರುವುದರಿಂದ, ಇವರುಗಳ ಮೇಲೆ ಮಾಡಲಾದ ಆಪಾದನೆಗಳಿಂದ ಮುಕ್ತರನ್ನಾಗಿಸಲು ಆದೇಶ ಸಂಖ್ಯೆ: ಆನಾಸ 104 ಕಾಮಾಸೇ 2001, ದಿನಾಂಕ:06.03.2003ರನ್ವಯ ಕರ್ನಾಟಕ ನಾಗರೀಕ ಸೇವೆಗಳು (ಸಿಸಿಎ) ನಿಯಮಾವಳಿಗಳ ನಿಯಮ 1957ರ ನಿಯಮ 14-ಎ ರಡಿಯಲ್ಲಿ ಪ್ರಾರಂಭಿಸಲಾದ ಶಿಸ್ತು ಕ್ರಮ ಹಾಗೂ ಆದೇಶ ಸಂಖ್ಯೆ: ಆನಾಸ 104 ಕಾಮಾಸೇ 2001, ದಿನಾಂಕ:16.06.2003ರನ್ವಯ ಕೆ.ಸಿ.ಎಸ್.ಆರ್. ನಿಯಮ 214ರಡಿ ನಡೆಸಬೇಕಾದ ಶಿಸ್ತು ಕ್ರಮ ಜರುಗಿಸುವುದನ್ನು ಈ ಮೂಲಕ ಕೈಬಿಟ್ಟು ಆರೋಪಗಳಿಂದ ದೋಷಮುಕ್ತರನ್ನಾಗಿ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 1258

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ, ಅರಣ್ಯ ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿರುವ ಒಂದು ವೇತನ ಶ್ರೇಣಿ ರಹಿತ ವೈಜ್ಞಾನಾಧಿಕಾರಿ, ಗ್ರೇಡ್-2 ಹುದ್ದೆಯ ಅವಧಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** ಕಡತ ಸಂಖ್ಯೆ: ಅಪಜೀ 101 ಇಪಿಸಿ 2005.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಕಡತದಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 8 ಸಸಿವಿ 2004, ದಿನಾಂಕ:16.02.2004ರಲ್ಲಿ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿನ ವೈಜ್ಞಾನಾಧಿಕಾರಿ ಹುದ್ದೆಯೊಂದನ್ನು ವೇತನ ಶ್ರೇಣಿ ರಹಿತ ಎಂದು ಪರಿವರ್ತಿಸಿ ಮುಂದುವರಿಸಿದ ಹುದ್ದೆಯು ದಿನಾಂಕ:23.04.2006ರಂದು ಕೊನೆಗೊಂಡಿರುವುದರಿಂದ, ಆ ಹುದ್ದೆಯ ಅವಧಿಯನ್ನು ದಿನಾಂಕ:24.04.2006ರಿಂದ ಜಾರಿಗೆ ಬರುವಂತೆ ಪುನಃ ಒಂದು ವರ್ಷದ ಅವಧಿಗೆ ಅಥವಾ ಸದರಿ ಹುದ್ದೆಯ ಅವಶ್ಯಕತೆ ಇರುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 25 ಸಸಿವಿ 2006, ಬೆಂಗಳೂರು, ದಿನಾಂಕ:23ನೇ ಆಗಸ್ಟ್, 2006**

ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಪರಿಸ್ಥಿತಿ ಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿರುವ ವೈಜ್ಞಾನಾಧಿಕಾರಿ ಗ್ರೇಡ್-2 ಹುದ್ದೆಯೊಂದನ್ನು ವೇತನ ಶ್ರೇಣಿ ರಹಿತ ಹುದ್ದೆ ಎಂದು ಪರಿವರ್ತಿಸಿ ಮುಂದುವರಿಸಿರುವ ಅವಧಿಯನ್ನು ದಿನಾಂಕ:24.04.2006 ರಿಂದ ಜಾರಿಗೆ ಬರುವಂತೆ ಪುನಃ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.07.1996ರಲ್ಲಿ ಅನುಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 1259

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.

**ವಿಷಯ:** ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಮಾಹಿತಿ ತಂತ್ರಜ್ಞಾನ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಮಾತಂಇ 05 ಇಸಂಸೇ 2004, ದಿನಾಂಕ:20.07.2006.

**ಪ್ರಸ್ತಾವನೆ:**

ಮೇಲೆ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 2 ಸಸಿವಿ 2005 (ಭಾಗ), ದಿನಾಂಕ:04.10.2005ರಲ್ಲಿ ಮುಂದುವರಿಸಲಾದ ತಾತ್ಕಾಲಿಕ ಹುದ್ದೆಗಳ ಮುಂದುವರಿಕೆ ಅವಧಿಯು ಮುಕ್ತಾಯವಾಗಿರುವುದಿಂದ ಈ ಹುದ್ದೆಗಳನ್ನು ದಿನಾಂಕ:01.04.2006 ರಿಂದ ಮತ್ತೊಂದು ವರ್ಷದ ಅವಧಿಗೆ ಅಥವಾ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಪುನರ್ ರಚನೆಯಾಗುವವರೆಗೆ ಮುಂದುವರೆಸುವಂತೆ ಪ್ರಸ್ತಾವನೆ ಇದೆ. ಇದರನ್ವಯ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 33 ಸಸಿವಿ 2006, ಬೆಂಗಳೂರು, ದಿನಾಂಕ:22ನೇ ಆಗಸ್ಟ್, 2006**

ಕರ್ನಾಟಕ ಸರ್ಕಾರ ಸಚಿವಾಲಯದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:01.04.2006 ರಿಂದ ಒಂದು ವರ್ಷದ ಅವಧಿಯವರೆಗೆ ಅಥವಾ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ವಿಭಾಗವು ಪುನರ್ ರಚನೆ ಆಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | |
|---|---|
| 1. ಪ್ರಧಾನ ಕಾರ್ಯದರ್ಶಿ: ಕಾರ್ಯದರ್ಶಿ | 1 ಹುದ್ದೆ |
| 2. ಅಧೀನ ಕಾರ್ಯದರ್ಶಿ: ಶಾಖಾಧಿಕಾರಿ | 1 ಹುದ್ದೆ |
| 3. ವಿಶೇಷ ಕರ್ತವ್ಯಾಧಿಕಾರಿ (ವೇತನ ಶ್ರೇಣಿ ರಹಿತ) | 1 ಹುದ್ದೆ |
| 4. ಆರ್ಥಿಕ ಸಲಹೆಗಾರರು (ವೇತನ ಶ್ರೇಣಿ ರಹಿತ) | 1 ಹುದ್ದೆ |
| 5. ತಾಂತ್ರಿಕ ಸಹಾಯಕರು: ಪ್ರೋಗ್ರಾಮರ್ (ವೇತನ ಶ್ರೇಣಿ ರಹಿತ) | 2 ಹುದ್ದೆಗಳು |
| 6. ಹಿರಿಯ ಸಹಾಯಕರು: ಶೀಘ್ರಲಿಪಿಗಾರರು | 3 ಹುದ್ದೆಗಳು |
| 7. ಕಿರಿಯ ಸಹಾಯಕರು | 1 ಹುದ್ದೆ |
| 8. ದಲಾಯತ್ | 3 ಹುದ್ದೆಗಳು |
| 9. ಚಾಲಕರು | 2 ಹುದ್ದೆಗಳು |
| 10. ಉಪ ಕಾರ್ಯದರ್ಶಿ | 1 ಹುದ್ದೆ |
| 11. ಶಾಖಾಧಿಕಾರಿ | 1 ಹುದ್ದೆ |
| 12. ಪತ್ರಾಂಕಿತ ಆಪ್ತ ಸಹಾಯಕರು | 1 ಹುದ್ದೆ |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಇ 96, ದಿನಾಂಕ:10.07.1996ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 1260

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ(ಸೇವೆಗಳು-2).